KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಆಗಸ್ಟ್ ೧೨, ೨೦೧೦ (ಶ್ರಾವಣ ೨೧, ಶಕ ವರ್ಷ ೧೯೩೨) | ಸಂಚಿಕೆ ೩೨ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**KARNATAKA GOVERNMENT SECRETARIAT**

**NOTIFICATION**

**No. HD 13 SCF 2010 (P), Bangalore, Dated: 11th June 2010**

In exercise of the powers conferred by sub-section (1) of Section 3 of the Conservation of Foreign Exchange and Prevention of Smuggling Activities Act, 1974 (Central Act 52 of 1974) and in supersession of all the Notifications issued earlier in this behalf, the Government of Karnataka hereby specially empowers the Secretary toGovernment (PCAS), Home Department for the purposes of the said section.

By Order and in the name of the Governor of Karnataka,

P.R. 664

**S.V. RANGANATH**

Chief Secretary to Government.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 2 ಇಸಂಗ್ರ 2010, ಬೆಂಗಳೂರು, ದಿನಾಂಕ: 10ನೇ ಜೂನ್, 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎರ ಉಪಕಲಂ (2) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತುಮಕೂರು ಜಿಲ್ಲಾ ಪಂಚಾಯತ್, ತುಮಕೂರು ಇದರ ಒಂದು ಲಕ್ಷಕ್ಕೂ ಮೀರಿದ ಎಲ್ಲಾ ಸಂಗ್ರಹಣೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ, ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದೆಂದು ಕರ್ನಾಟಕ ಸರ್ಕಾರ, ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಪಾತಲಿಂಗಯ್ಯ**

ಪೀಠಾಧಿಕಾರಿ–1, (ಇ–ಆಡಳಿತ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 2 EPR 2010, Bangalore, Dated: 10th June 2010**

In exercise of the powers conferred by sub-section (2) of Section 18A of the Karnataka Transparency in Public Procurements Act, 1999 (Karnataka Act 29 of 2000), the Government of Karnataka hereby specify that the Tumkur Zilla Panchayat, Tumkur shall, with immediate effect, procure One lakh and above all its procurements through e-Procurement platform.

By Order and in the name of the Governor of Karnataka,

**T. PATHALINGAIAH**

P.R. 667

Desk Officer-1, (e-Governance)

Department of Personnel & Administrative Reforms

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 2 ಇಸಂಗ್ರ 2010(1), ಬೆಂಗಳೂರು, ದಿನಾಂಕ: 24ನೇ ಜೂನ್, 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎರ ಉಪಕಲಂ (2) ರನ್ವಯ, ಅದನ್ನು ಕರ್ನಾಟಕ ಸಾರ್ವತ್ರಿಕ ಉಪಬಂಧಗಳ ಅಧಿನಿಯಮ, 1899 (Karnataka General Clauses Act, 1899) (1899ರ ಕರ್ನಾಟಕ ಅಧಿನಿಯಮ ಸಂಖ್ಯೆ: III) ದೊಂದಿಗೆ ಓದಿಕೊಂಡಂತೆ, ಇವುಗಳನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಕರ್ನಾಟಕ ಭೂಸೇನಾ ನಿಗಮ ನಿಯಮಿತಕ್ಕೆ ಸಂಬಂಧಿಸಿದ ದಿನಾಂಕ: 09.09.2008ರ ಅಧಿಸೂಚನೆ ಸಂಖ್ಯೆ: ಸಿಆಸುಇ 26 ಇಜಿವಿ 2003 (ಭಾ–1) ವನ್ನು ಈ ಮೂಲಕ ರದ್ದುಪಡಿಸುತ್ತಾ, ಕರ್ನಾಟಕ ರೂರಲ್ ಇನ್ ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಡ್‌ರ, ಒಂದು ಲಕ್ಷಕ್ಕೂ ಮೀರಿದ ಎಲ್ಲಾ ಸಂಗ್ರಹಣೆಗಳನ್ನು ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಈ ತಕ್ಷಣದಿಂದ ಜಾರಿಗೆ ಬರುವಂತೆ ಸಂಗ್ರಹಿಸತಕ್ಕದೆಂದು, ಕರ್ನಾಟಕ ಸರ್ಕಾರ, ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹಾ ಹಂದಿಗೋಳ**

ಪೀಠಾಧಿಕಾರಿ–1, (ಇ–ಆಡಳಿತ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 2 EPR 2010(2), Bangalore, Dated: 24th June 2010**

In exercise of the powers conferred by sub-section (2) of Section 18A of the Karnataka Transparency in Public Procurements Act, 1999 (Karnataka Act 29 of 2000), read with section 21 of the Karnataka General Clauses Act, 1899 (Karnataka Act III of 1899) and in supersession of the notification No. DPAR 26 EGV 2003 (P-1) dated 09.09.2008 relating to Karnataka Land Army Corporation, the Government of Karnataka hereby specify that the Karnataka Rural Infrastructure Development Limited, shall procure all its procurements value at Rs. One Lakh and above through e-Procurement platform with immediate effect.

By Order and in the name of the Governor of Karnataka,

**LALITHA .H. HANDIGOL**

P.R. 668

Desk Officer-1, (e-Governance)

Department of Personnel & Administrative Reforms

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 2 ಇಸಂಗ್ರ 2010(3), ಬೆಂಗಳೂರು, ದಿನಾಂಕ: 24ನೇ ಜೂನ್, 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎರ ಉಪಕಲಂ (2) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮ, ಬೆಂಗಳೂರು ಇದರ ಎಲ್ಲಾ ಸಂಗ್ರಹಣೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ, ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದೆಂದು, ಕರ್ನಾಟಕ ಸರ್ಕಾರ, ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹಾ ಹಂದಿಗೋಳ**

ಪೀಠಾಧಿಕಾರಿ–1, (ಇ–ಆಡಳಿತ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 2 EPR 2010(4), Bangalore, Dated: 24th June 2010**

In exercise of the powers conferred by sub-section (2) of Section 18A of the Karnataka Transparency in Public Procurements Act, 1999 (Karnataka Act 29 of 2000), the Government of Karnataka hereby specify that the Karnataka State Powerloom Development Corporation Limited, Bengaluru shall, with immediate effect, procure all its procurements through e-Procurement platform.

By Order and in the name of the Governor of Karnataka,

**LALITHA .H. HANDIGOL**

Desk Officer-1, (e-Governance)

Department of Personnel & Administrative Reforms

P.R. 669

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 48 ಇಆಇ 2010, ಬೆಂಗಳೂರು, ದಿನಾಂಕ: 29ನೇ ಜೂನ್, 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ (2000ದ ಕರ್ನಾಟಕ ಅಧಿನಿಯಮ ಸಂಖ್ಯೆ 29)ರ ಕಲಂ 7 ಮತ್ತು 9 ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಟೇಬಲ್ 1, 2 ಮತ್ತು 3ರ ಅಂಕಣ (1) ರಲ್ಲಿ ನಮೂದಿಸಲಾದ ಅಧಿಕಾರಿಗಳನ್ನು ಅದರ ಅಂಕಣ (2)ರಲ್ಲಿ ಅನುಗುಣವಾದ ನಮೂದುಗಳಂತೆ ನಿರ್ದಿಷ್ಟಪಡಿಸಲಾದ ಪ್ರಾಧಿಕಾರಗಳಾಗಿ ಈ ಮೂಲಕ ನೇಮಿಸಲಾಗಿದೆ.

**ಟೇಬಲ್–1**

**ಸದರಿ ಕಲಂ 7ರ ಉಪ ಕಲಂ (1)ರಡಿ ಸರ್ಕಾರ ಮಾಡಿದ ನೇಮಕಾತಿ**

| ಅಧಿಕಾರಿಯ ಪದನಾಮ | ಪ್ರಾಧಿಕಾರ |
|---|---|
| ಸರ್ಕಾರದ ಅಪರ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ) | ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿ |

**ಟೇಬಲ್–2**

**ಸದರಿ ಕಲಂ 9ರ ಉಪ ಕಲಂ (i)ರಡಿ ಸಂಗ್ರಹಣಾ ಸಂಸ್ಥೆ ಮಾಡಿದ ನೇಮಕಾತಿ**

| ಅಧಿಕಾರಿಯ ಪದನಾಮ | ಪ್ರಾಧಿಕಾರ |
|---|---|
| ಸರ್ಕಾರದ ಅಪರ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ) | ಟೆಂಡರ್ ಆಹ್ವಾನಿಸುವ ಪ್ರಾಧಿಕಾರ |

ಟೇಬಲ್–3

ಸದರಿ ಕಲಂ 9ರ ಉಪ ಕಲಂ (ii)ರಡಿ ಸಂಗ್ರಹಣಾ ಸಂಸ್ಥೆ ಮಾಡಿದ ನೇಮಕಾತಿ

| ಅಧಿಕಾರಿಯ ಪದನಾಮ | ಪ್ರಾಧಿಕಾರ |
|---|---|
| ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ) | ಟೆಂಡರ್ ಅಂಗೀಕರಿಸುವ ಪ್ರಾಧಿಕಾರ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಎಸ್. ಪ್ರಸನ್ನಕುಮಾರ್**

ಪೀಠಾಧಿಕಾರಿ–2,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 48 EGM 2010, Bangalore, Dated: 29th June 2010**

In exercise of the powers conferred by sections 7 and 9 of the Karnataka Transparency in Public Procurements Act, 1999 (Karnataka Act 29 of 2010) the officers specified in column (1) of the Table 1, 2 and 3 below are hereby appointed to be the authorities specified in the corresponding entries in column (2) thereof:

**TABLE-1**

**Appointment made by Government under sub-section (1) of section 7 ibid**

| Designation of the Officer | Authority |
|---|---|
| Additional Secretary to Government, Department of Personnel and Administrative Reform (e-Governance) | State Tender Bulletin Officer |

**TABLE-2**

**Appointment made by the Procurement Entity under sub-section (i) of section 9 ibid**

| Designation of the Officer | Authority |
|---|---|
| Additional Secretary to Government, Department of Personnel and Administrative Reform (e-Governance) | Tender Inviting Authority |

**TABLE-3**

**Appointment made by the Procurement Entity under sub-section (ii) of section 9 ibid**

| Designation of the Officer | Authority |
|---|---|
| Principal Secretary to Government, Department of Personnel and Administrative Reform (e-Governance) | Tender Accepting Authority |

By Order and in the name of the Governor of Karnataka,

**G.S. PRASANNA KUMAR**

P.R. 670 Desk Officer-2,

Department of Personnel & Administrative Reforms (e-Governance)

**TRANSPORT SECRETARIAT**

**NOTIFICATION**

**No. SARIE 151 SAEPA 2010, Bangalore, Dated: 14th June 2010**

In exercise of the powers conferred by sub-clause (1) of section 16 of the Karnataka Motor Vehicle Taxation Act, 1957 (Karnataka Act 35 of 1957) the Government of Karnataka, hereby exempt

from payment of road tax and also payment of registration fee to the following personal vehicle, belonging to Mr.Rolf Saligmann, Consul General of consulate General of Federal Republic of Germany (FRG) in Bangalore.

| | | |
|---|---|---|
| Name of the Foreign Representation | : | Mr. Rolf Saligmann Consul General of consulate General of Federal Republic of Germany (FRG) |
| Personal Vehicle | : | 01 CC 1A (SEDAN) |

(* Vehicle No. to be assigned by the jurisdictional R.T.O.)

By Order and in the name of the Governor of Karnataka,

**H.B. RAGHUNATH**

P.R. 671

Desk Officer, Transport Department

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 66 ಬೆಂಭೂಸ್ವಾ 2010, ಬೆಂಗಳೂರು, ದಿನಾಂಕ: 28ನೇ ಜೂನ್, 2010**

ಬೆಂಗಳೂರು ಉತ್ತರ ತಾಲ್ಲೂಕು, ಯಲಹಂಕ ಹೋಬಳಿ, ಜಕ್ಕೂರು ಗ್ರಾಮದ ಸರ್ವೆ ನಂ.91/1 (91/1ಬಿ)ರಲ್ಲಿನ 36 ಗುಂಟೆ ಜಮೀನನ್ನು ಭೂಸ್ವಾಧೀನ ಕಾಯ್ದೆ ಕಲಂ 48/(1)ರಡಿ ಭೂಸ್ವಾಧೀನದಿಂದ ಕೈಬಿಟ್ಟು ಹೊರಡಿಸಲಾಗಿದ್ದ ಅಧಿಸೂಚನೆ ಸಂಖ್ಯೆ:ಯುಡಿಡಿ 66 ಬೆಂಭೂಸ್ವಾ 2010, ದಿನಾಂಕ: 07/06/2010ರ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಪ್ರೇಮಚಂದ್ರ**

ಪಿ.ಆರ್. 673

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 403 ವೆಚ್ಚ–12/10, ಬೆಂಗಳೂರು, ದಿನಾಂಕ: 17ನೇ ಜೂನ್, 2010**

ಕಾರ್ಮಿಕ ಇಲಾಖೆಯ ಶಿಫಾರಸ್ಸನ್ನು ಪರಿಶೀಲಿಸಿ, ನಿರ್ದೇಶಕರು, ಕಾರ್ಮಿಕ ರಾಜ್ಯ ವಿಮಾ ಯೋಜನೆ(ವೈ) ಸೇವೆಗಳು, ಇವರು ಕಾರ್ಮಿಕ ರಾಜ್ಯ ವಿಮಾ ಆಸ್ಪತ್ರೆ/ಚಿಕಿತ್ಸಾಲಯಗಳಿಗೆ ಅಗತ್ಯವಿರುವ ಔಷಧಿಗಳನ್ನು ನಿಗಮದಿಂದ ನಿಗದಿ ಮಾಡಿದ ದರಗಳಲ್ಲಿ ಕಾರ್ಮಿಕ ರಾಜ್ಯ ವಿಮಾ ನಿಗಮವು ಗುರುತಿಸಿರುವ ಸಂಸ್ಥೆಗಳಿಂದ ನೇರವಾಗಿ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಕಾರ್ಮಿಕ ಇಲಾಖೆಗೆ ಎರಡು ವರ್ಷಗಳ ಕಾಲ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ಸಂಗ್ರಹಣಾ ಸಂಸ್ಥೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಶೋಕ ಎಸ್.ಜೀವರಗಿ**

ಪಿ.ಆರ್. 674

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

### ಅಧಿಸೂಚನೆ

**ಸಂಖ್ಯೆ: ಆಇ 415 ವೆಚ್ಚ–12/10, ಬೆಂಗಳೂರು, ದಿನಾಂಕ: 23ನೇ ಜೂನ್, 2010**

ರಾಜ್ಯದ 16 ಪಟ್ಟಣಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ವತಿಯಿಂದ ಕೈಗೊಳ್ಳುವ 'ಕನ್ನಡ ಗಂಗಾ' ಯೋಜನೆಗೆ ಸಂಬಂಧಿಸಿದಂತೆ ನಗರಾಭಿವೃದ್ಧಿ ಇಲಾಖೆಯ ಪ್ರಸ್ತಾವನೆಯನ್ನು ಪರಿಗಣಿಸಿ Feasibility ಮತ್ತು ಸವಿವರ ಯೋಜನಾ ವರದಿಯನ್ನು (Module-1) ತಯಾರಿಸುವ (DPR Preparation) ಪ್ರಕ್ರಿಯೆಯನ್ನು ರೂ.3.28 ಕೋಟಿಗಳ ವೆಚ್ಚದಲ್ಲಿ ನೇರವಾಗಿ ಮೆ: ಕೆ.ಐ.ಪಿ.ಡಿ.ಸಿ. (ಕೆ.ಎಸ್.ಐ.ಐ.ಡಿ.ಸಿ ಮತ್ತು ಐ.ಎಲ್. & ಎಫ್.ಎಸ್.ಗಳ

ಸಹಭಾಗಿತ್ವ ಕಂಪನಿ) ಸಂಸ್ಥೆಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ನಗರಾಭಿವೃದ್ಧಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

Feasibility ಅಧ್ಯಯನ ಮತ್ತು ಸವಿವರ ಯೋಜನಾ ವರದಿಯಲ್ಲಿ ಯೋಜನೆಯ ಒಟ್ಟು ವೆಚ್ಚದ ಮರುಪಾವತಿ ಅಗತ್ಯವಿರುವ ದರಗಳ ಮಟ್ಟ (O & M, bulk water ಮತ್ತು ಬಂಡವಾಳ ವೆಚ್ಚ) ಮತ್ತು "ಪಾವತಿಸುವ ಸ್ವ–ಇಚ್ಛೆ" (willingness to pay) ಸಮೀಕ್ಷೆಯನ್ನು ಒಳಗೊಂಡಿರಬೇಕು; ಅಲ್ಲದೇ, ಖಾಸಗಿ ವಲಯಗಳ ಭಾಗವಹಿಸುವಿಕೆಯಿಂದಾಗಿ ಗ್ರಾಹಕರುಗಳ ಮತ್ತು ನಗರ ಸ್ಥಳೀಯ ಸಂಸ್ಥೆಗಳ "Value for money" (vfm) ವಿಶ್ಲೇಷಣೆಯನ್ನು ಕೂಡ ಒಳಗೊಂಡಿರಬೇಕು ಎಂಬ ಷರತ್ತಿಗೆ ಒಳಪಟ್ಟು ಈ ವಿನಾಯಿತಿಯನ್ನು ನೀಡಲಾಗಿದೆ.

ಮೆ:ಕೆ.ಐ.ಪಿ.ಡಿ.ಸಿ ಸಂಸ್ಥೆಯು ಈ ಕಾಮಗಾರಿಗಳನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ಸಂಗ್ರಹಣಾ ಸಂಸ್ಥೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಶೋಕ ಎಸ್.ಜೀವರಗಿ**

ಪಿ.ಆರ್. 675 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಅಧಿಸೂಚನೆ**

**ಸಂಖ್ಯೆ: ಆಇ 431 ವೆಚ್ಚ–12/10, ಬೆಂಗಳೂರು, ದಿನಾಂಕ: 17ನೇ ಜೂನ್, 2010**

ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಶಿಫಾರಸ್ಸನ್ನು ಪರಿಗಣಿಸಿ, 2010–11ನೇ ಸಾಲಿನಲ್ಲಿ ಸಾರ್ವಜನಿಕ ಉದ್ದಿಮೆಗಳ ಅಧಿಕಾರಿ/ನೌಕರರಿಗೆ ವಿವಿಧ ವಿಷಯಗಳಿಗೆ ತರಬೇತಿಯನ್ನು ನೀಡಲು ಒಟ್ಟು ರೂ.37,77,500.00 ಗಳ ವೆಚ್ಚದಲ್ಲಿ ಈ ಕೆಳಕಂಡ ಪ್ರತಿಷ್ಠಿತ ಸಂಸ್ಥೆಗಳಿಂದ ನೇರವಾಗಿ ಸೇವಾ ಸಂಗ್ರಹಣೆಯನ್ನು ಪಡೆಯಲು, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999 ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಸಾರ್ವಜನಿಕ ಉದ್ದಿಮೆಗಳ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

1) ಎ.ಟಿ.ಐ, ಮೈಸೂರು
2) ಐ.ಪಿ.ಇ, ಹೈದರಾಬಾದ್
3) ಎ.ಎಸ್.ಸಿ.ಐ, ಹೈದರಾಬಾದ್
4) ಐ.ಎಫ್.ಸಿ.ಐ, ಬೆಂಗಳೂರು
5) ಎನ್.ಪಿ.ಸಿ, ಬೆಂಗಳೂರು
6) CEDOK, ಧಾರವಾಡ
7) ಕೆ.ಎಸ್.ಎಫ್.ಸಿ, ಬೆಂಗಳೂರು
8) ಆರ್.ಐ.ಸಿ.ಎಂ, ಬೆಂಗಳೂರು
9) ಐ.ಸಿ.ಡಬ್ಲ್ಯೂ.ಎ, ಬೆಂಗಳೂರು

ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ಸಂಗ್ರಹಣಾ ಸಂಸ್ಥೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಶೋಕ ಎಸ್.ಜೀವರಗಿ**

ಪಿ.ಆರ್. 676 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಅಧಿಸೂಚನೆ**

**ಸಂಖ್ಯೆ: ಆಇ 482 ವೆಚ್ಚ–12/10, ಬೆಂಗಳೂರು, ದಿನಾಂಕ: 28ನೇ ಜೂನ್, 2010**

ಕರ್ನಾಟಕ ವಿಧಾನ ಮಂಡಲದ ಪ್ರಸ್ತಾವನೆಯನ್ನು ಪರಿಗಣಿಸಿ, ಅಧಿಸೂಚನೆ ಸಂಖ್ಯೆ: ಆಇ 258 ವೆಚ್ಚ–12/2010, ದಿ:29.04.2010ನ್ನು ಹಿಂಪಡೆದು, ಭಾರತೀಯ ಜನತಾ ಪಾರ್ಟಿಯ ಶಾಸಕಾಂಗ ಪಕ್ಷದ ಕಾರ್ಯಾಲಯಕ್ಕೆ ರೂ.1,44,982.00 ಗಳ ವೆಚ್ಚದಲ್ಲಿ ಪೀಠೋಪಕರಣಗಳನ್ನು ಮೆ:ಫೆದರ್‌ಲೈಟ್ ಸಂಸ್ಥೆಯಿಂದ ನೇರವಾಗಿ ಖರೀದಿಸಲು ಕರ್ನಾಟಕ ಸಾರ್ವಜನಿಕ

ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಕರ್ನಾಟಕ ವಿಧಾನ ಮಂಡಲಕ್ಕೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ಸಂಗ್ರಹಣಾ ಸಂಸ್ಥೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಅಶೋಕ ಎಸ್.ಜೀವರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

ಪಿ.ಆರ್. 677

**ಅಧಿಸೂಚನೆ**

**ಸಂಖ್ಯೆ: ಆಇ 484 ವೆಚ್ಚ–12/10, ಬೆಂಗಳೂರು, ದಿನಾಂಕ: 10ನೇ ಜೂನ್, 2010**

ಯುವಜನ ಸೇವಾ ಇಲಾಖೆಯು ಕೋರಿರುವಂತೆ ದಿ:12.06.2010 ರಿಂದ 19.06.2010 ರವರೆಗೆ ನಡೆಸಲು ಉದ್ದೇಶಿಸಿರುವ ಹಾಕಿ ಪಂದ್ಯಾವಳಿಗಳ ಕಾರ್ಯಕ್ರಮ ಸಂಘಟನೆಯ ಕಾರ್ಯವನ್ನು ಎಮ್.ಸಿ. ಅಂಡ್ ಎ ಸಂಸ್ಥೆಗೆ ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಯುವಜನ ಸೇವಾ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಎಮ್.ಸಿ. ಅಂಡ್ ಎ ಸಂಸ್ಥೆಯು ಈ ಕಾಮಗಾರಿಗಳನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ. ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ಸಂಗ್ರಹಣಾ ಸಂಸ್ಥೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಅಶೋಕ ಎಸ್.ಜೀವರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

ಪಿ.ಆರ್. 678

**ಅಧಿಸೂಚನೆ**

**ಸಂಖ್ಯೆ: ಆಇ 490 ವೆಚ್ಚ–12/10, ಬೆಂಗಳೂರು, ದಿನಾಂಕ: 2ನೇ ಜುಲೈ, 2010**

ರಾಜ್ಯದಲ್ಲಿ ಮೋಟಾರು ವಾಹನಗಳಿಗೆ ಹೈಸೆಕ್ಯೂರಿಟಿ ನೋಂದಣಿ ಫಲಕ ಅಳವಡಿಕೆ ಯೋಜನೆ ಸಂಬಂಧ ಆರ್.ಎಫ್.ಪಿ ಸಿದ್ದಪಡಿಸುವ ಕಾರ್ಯವನ್ನು ರೂ.19.34 ಲಕ್ಷಗಳ ವೆಚ್ಚದಲ್ಲಿ ನೇರವಾಗಿ ರಾಜ್ಯ ಸರ್ಕಾರಿ ಸ್ವಾಮ್ಯದ ಮೆ:ಐಡೆಕ್ ಸಂಸ್ಥೆಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಸಾರಿಗೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಐಡೆಕ್ ಸಂಸ್ಥೆಯು ಈ ಕಾಮಗಾರಿಯನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ. ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಸಂಗ್ರಹಣಾ ಸಂಸ್ಥೆಯು ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ದೃಢಪಡಿಸಿಕೊಳ್ಳುವುದು ಹಾಗೂ ಮಾನ್ಯ ಉಚ್ಚ ನ್ಯಾಯಾಲಯದ ಆದೇಶದ ಉಲ್ಲಂಘನೆಯಾಗದಂತೆ ಖಾತ್ರಿಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಶೇಖರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

ಪಿ.ಆರ್. 679

**ಅಧಿಸೂಚನೆ**

**ಸಂಖ್ಯೆ: ಆಇ 537 ವೆಚ್ಚ–12/10, ಬೆಂಗಳೂರು, ದಿನಾಂಕ: 30ನೇ ಜೂನ್, 2010**

NICSI ಯಿಂದ ಒಬ್ಬರು ಪ್ರೋಗ್ರಾಮ್ ಅಸಿಸ್ಟೆಂಟ್‌ರವರನ್ನು ಎರಡು ವರ್ಷಗಳ ಅವಧಿಗೆ ವಾರ್ಷಿಕ ರೂ.2.08 ಲಕ್ಷಗಳ ವೆಚ್ಚದಲ್ಲಿ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕಕ್ಕೆ ನಿಯೋಜನೆಯ ಮೇಲೆ ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಆರ್ಥಿಕ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಶೇಖರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

ಪಿ.ಆರ್. 680

**ಅಧಿಸೂಚನೆ**

**ಸಂಖ್ಯೆ: ಆಇ 546 ವೆಚ್ಚ–12/10, ಬೆಂಗಳೂರು, ದಿನಾಂಕ: 2ನೇ ಜುಲೈ, 2010**

'ಪರಿಷ್ಕೃತ ಭಾಗ್ಯಲಕ್ಷ್ಮಿ ಯೋಜನೆ'ಯನ್ನು ತ್ವರಿತವಾಗಿ ಅನುಷ್ಠಾನಗೊಳಿಸಲು ಕೇಂದ್ರ ಸರ್ಕಾರದ ಸ್ವಾಮ್ಯ ಸಂಸ್ಥೆಯಾದ ಮೆ:ಭಾರತೀಯ ಜೀವ ವಿಮಾ ನಿಗಮದ (Life Insurance Corporation of India) ಮೂಲಕ ಪಾಲುದಾರ ಹಣಕಾಸು ಸಂಸ್ಥೆಯಾಗಿ ನಿರ್ವಹಿಸಲು ಅಧಿಸೂಚನೆ ಸಂಖ್ಯೆ: ಆಇ 452 ವೆಚ್ಚ–12/2010, ದಿನಾಂಕ:27.05.2010ರಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ದಿನಾಂಕ:30.09.2010ರವರೆಗೆ ನೀಡಲಾಗಿದ್ದ ವಿನಾಯಿತಿಯನ್ನು ದಿನಾಂಕ:31.03.2011ರವರೆಗೆ ಮಾತ್ರ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್. 681

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಕೃಷಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕೃತೋಇ 22 ಕೃಇಮಂ 2010, ಬೆಂಗಳೂರು, ದಿನಾಂಕ: 7ನೇ ಜುಲೈ, 2010**

ಕರ್ನಾಟಕ ರಾಜ್ಯ ಬೀಜ ಪ್ರಮಾಣನ ಸಂಸ್ಥೆ, ಬೆಂಗಳೂರು ಇದರ ಅಂತರ ನಿಯಮಾವಳಿಯ (ಆರ್ಟಿಕಲ್ಸ್ ಆಫ್ ಅಸೋಸಿಯೇಷನ್) ಅನುಚ್ಛೇದ 6(ಎಫ್) ಮತ್ತು (ಜಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಈ ಕೆಳಕಂಡವರನ್ನು ಸಂಸ್ಥೆಯ ಆಡಳಿತ ಮಂಡಳಿಯ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

| ಕ್ರ. ಸಂ. | ಹೆಸರು | ಬೀಜ ಉತ್ಪಾದನಾ ಪ್ರತಿನಿಧಿಗಳು |
|---|---|---|
| 1 | ಶ್ರೀ ಜಗದೀಶ್ ಎಸ್ ಬಸಗಣ್ಣಿ | ವರದಾ ಸೀಡ್ಸ್, ಸಿರಸಿ ರೋಡ್, ಹಾವೇರಿ |
| 2 | ಶ್ರೀ ನಾರಾಯಣ ಪಿ. ಸಫಾರೆ, | ಸಾಗರ ಸೀಡ್ಸ್, ಬಾಗಲಕೋಟೆ |
| 3 | ಶ್ರೀ ಆರ್. ಜಿ. ಪರಮಶಿವಪ್ಪ | ಸಿದ್ದಲಿಂಗೇಶ್ವರ ಸೀಡ್ಸ್ ಪ್ರೊಡ್ಯೂಸರ್ಸ್, ದಾವಣಗೆರೆ |

| ಹೆಸರು | | ರೈತ ಸಮುದಾಯ |
|---|---|---|
| 1 | ಶ್ರೀ ರೇವಣಪ್ಪ ಬಿನ್ ಹನುಮಂತಪ್ಪ ಸಂಗಟಿ, ಕುಡುಗುಂಟಿ, ಯಲಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆ | ಪ್ರಗತಿಪರ ರೈತರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಪಿ.ಆರ್. 682

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಇಲಾಖೆ.

**FINANCE SECRETARIAT**

**NOTIFICATION**

**No. FD 36 BFC 2010, Bangalore, Dated: 25th June 2010**

In exercise of the powers conferred under Sub-section (1) (d) of Section 28 of the State Financial Corporations Act, 1951, the Government of Karnataka, on the recommendation of the Small Industries Development Bank of India (SIDBI) conveyed through their letter No.7426/DFID/SFCs/LOA dated 31/03/2010, hereby accord approval for enhancing the ceiling on the aggregate of paid-up share capital and free reserves from Rs.20.00 crores to Rs.30.00 crores in respect of any industrial concern to be assisted by Karnataka State Financial Corporation.

By Order and in the name of the Governor of Karnataka,

**C. SHAMA RAO**

P.R. 683

Deputy Secretary to Govt.

Finance Department (FR & BCC)

**EDUCATION SECRETARIAT**

**NOTIFICATION**

**No.ED 138 TPU 2009, Bangalore, Dated: 28th June 2010**

The draft of the following rules further to amend the Karnataka Pre-University Education (Academic, Registration, Administration, Grant-in-aid etc.) Rules 2006, which the Government of Karnataka proposes to make in exercise of the powers conferred by sub-section (1) of section 145 of the Karnataka Education Act, 1983 (Karnataka Act 1 of 1995), is hereby published as required by sub-section (1) of section 145 of the said Act, for the information of all the persons likely to be affected thereby and notice is hereby given that the said draft will be taken into consideration after thirty days from the date of its publication in the official Gazette.

Any objection or suggestion which may be received by the State Government from any person with respect to the said draft, before the expiry of the period specified above, will be considered by the State Government. Objections and suggestions may be addressed to Principal Secretary to Government Education Department (Pre-University Education) M.S.Building, Bangalore-560 001.

**DRAFT RULES**

**1. Title and commencement:-** (1) These rules may be called the Karnataka Pre-University Education (Academic, Registration, Administration, Grant-in-aid etc.) (Amendment) Rules, 2010.

(2) They shall come into force from the date of their publication in the official Gazette.

**2. Amendment of rule 15:-** In the Karnataka Pre-University Education (Academic, Registration, Administration, Grant-in-aid etc.) Rules 2006, in rule 15, after sub-rule (2) the following proviso shall be inserted, namely:-

" Provided that direct recruitment vacancies in an aided institution may be filled by appointment on compassionate grounds. The provisions of the Karnataka Civil Services (Appointment on Compassionate Grounds) Rules, 1996, as amended from time to time and the orders, circulars etc issued by the Government from time to time in this regard shall apply mutates mutandis to such appointment subject to following modifications, namely:-

(1) In case a vacancy is not available in the private aided educational institutions imparting Pre-University Education, where the deceased employee has worked, the eligible dependent of such an employee, who seeks appointment under these rules, may be appointed on compassionate grounds, against a vacancy available in any other aided private educational institution in the manner specified below:-

(a) The Deputy Director of Pre-University Education concerned shall identify the vacancy available in any other aided private educational institution imparting Pre-University Education within the district where the deceased employee worked and direct such an institution to take necessary action to appoint the dependent concerned to such a vacancy. Upon receipt of such a direction, the managing committee of the institution shall formulate a proposal and forward the same to the competent authority seeking approval to the appointment.

(b) In case no vacancy is available within the district where the deceased employee worked, the Deputy Director of Pre-University Education shall forward the records to the Director, Pre-University Education who shall identify the vacancy available in any other aided private educational institution imparting Pre-University Education anywhere in the state and direct such an institution to take necessary action to

appoint the dependent concerned to such a vacancy. Upon receipt of such a direction, the managing committee of the institution shall formulate a proposal and forward the same to the competent authority seeking approval to the appointment.

(2) In case of a dependent from a religious or linguistic minority institution seeking appointment on compassionate grounds he shall be appointed against a vacancy in any of the aided private educational institutions imparting Pre-University Education, belonging to religious and linguistic minority.

(3) Nothing contained in rule 9 of the Karnataka Civil services (Appointment on Compassionate grounds) Rules, 1996 shall be applicable to any aided institution.

Provided further that the applications pending on the date of commencement of the Karnataka Pre-University Education (Academic, Registration, Administration, Grant-in-aid etc.) (Amendment) Rules, 2010 shall be disposed of in accordance with the provisions of these rules as amended by the said rules".

By order and in the name of Governor of Karnataka,

**S.H. KURIYAVAR**

P.R. 718

Under Secretary to Government

Education Department (PUE)

**LABOUR SECRETARIAT**

**Notification**

**No: LD 75 LWA 2010, Bangalore, Dated: 15th June 2010**

In exercise of the powers conferred by Sub-section [1] of section 13 of the Employees Provident Funds and Miscellaneous Provisions Act, 1952 [19 of 1952], hereby appoints the officers holding the posts specified in column [2] of the table below in the office specified in column [3] of the said table to be Inspectors for the area specified in column [4] thereof, for the purpose of the said Act and the Schemes framed there under in relation to the establishments other than those specified in sub-clause [1] of clause [a] of section 2 of the said Act.

**TABLE**

| Sl No. | Officers | Office | Area |
|---|---|---|---|
| 1 | [i] Additional Central Provident Fund Commissioner | Employees Provident Fund Organization, O/o Addl. Central PF Commissioner, Karnataka & Goa, "Bhavishyanidhi Bhavan", No. 13, Rajaram Mohan Roy Road, Bangalore-25. | The State of Karnataka |
| **BANGALORE REGION** | | | |
| 2 | [i] Regional Provident Fund Commissioner<br><br>[ii] Assistant Provident Fund Commissioner | Employees Provident Fund Organisation, Reginal Office, "Bhavishyanidhi Bhavan", No. 13, Rajaram Mohan Roy Road, Bangalore-25. | Bangalore City Comprising of Pin Code No: 560001, 002, 003, 004, 006, 009, 010, 011, 018, 019, 020, 021, 023, 024, 025, 026, 027, 028, 030, 032, 039, 041, 042, 047, 050, 051, 052, 053, 055, 056, 059, 061, 062, 063, 064, 065, 069, |

| Sl No. | Officers | Office | Area |
|---|---|---|---|
| | [iii] Enforcement Officers. | | 070, 072, 074, 078, 079, 080, 082, 085, 087, 091, 092, 094, 097, 098 including Doddaballapur, Devanahalli, Vijayapura, Kengeri & Kengeri Satellite Town, Kumbalagudh Kumbalagudh Indl. Area, Channapatana Taluk & Ramanagaram District. |
| **PEENYA REGION** | | | |
| 3 | [i] Regional Provident Fund Commissioner<br><br>[ii] Assistant Provident Fund Commissioner<br><br>[iii] Enforcement Officers. | Employees Provident Fund Organization, Regional Office, No. S[1][F], 1st Cross, 1st Stage, Peenya, Bangalore-560 058. | Bangalore City comprising of Pin Code No. 560 005, 007, 008, 012, 013, 014, 015, 016, 017, 022, 029, 031, 033, 034, 035, 036, 037, 038, 040, 043, 044, 045, 046, 048, 049, 054, 057, 058, 066, 067, 068, 071, 073, 075, 076, 077, 079, 083, 084, 086, 087, 088, 089, 090, 091, 093, 095, 096, 561 229, 562 145, 562 158 in addition to areas comprising of Nelamangala Taluk, Jigani Industrail Area, Attible, Anekal Taluk, Veerasandra Industrial Area, Hosakote Taluk and Districts of Tumkur, Kolar & Chikkaballapur. |
| **MANGALORE REGION** | | | |
| 4 | [i] Regional Provident Fund Commissioner<br>[ii] Assistant Provident Fund Commissioner<br>[iii] Enforcement Officers. | Employees Provident Fund Organisation, Regional Office “Bhavishyanidhi Bhavan”, P.B. No. 572, Silva Road, Highlands, Mangalore- 575 002 | Districts of Dakshina Kannada, Shimga, Udupi, Chikmagalur, Hassan, Mysore, Mandya, Chamarajnagar & Coorg. |
| **GULBARGA REGION** | | | |
| 5 | [i] Regional Provident Fund Commissioner<br><br>[ii] Assistant Provident Fund Commissioner<br><br>[iii] Enforcement Officers. | Employees Provident Fund Organisation,<br>Regional Office<br>“Bhavishyanidhi Bhavan”, Sy No. 97, Beside Remand Home, Aland Road,<br>Gulbarga- 585 101, | Districts of Gulbarga, Yadagiri, Bijapur, Bidar, Raichur, Bagalkot, Dharwad, Belgaum, Uttar Kannada, Davangere, Haveri, Gadag, Bellary, Chitradurga, Koppal. |

By Order and in the name of the Governor of Karnataka

**N. R. PRABHU**

Under Secretary to Govt.

Labour Department.

P.R. 672

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ. ಕಾಇ 176 ಎಲ್‌ಎಸ್‌ಐ 2006, ಬೆಂಗಳೂರು, ದಿನಾಂಕ: 19ನೇ ಜುಲೈ 2010**

ಕರ್ನಾಟಕ ಕಾರ್ಮಿಕರ ರಾಜ್ಯ ವಿಮಾ ಯೋಜನೆ (ವೈದ್ಯಕೀಯ) ಸೇವೆಗಳು (ನೇಮಕಾತಿ) ತಿದ್ದುಪಡಿ ನಿಯಮಗಳು 2010ರ ಕರಡು ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ ಅಧಿನಿಯಮ 1978ರ (1990ರ ಕರ್ನಾಟಕ ಅಧಿನಿಯಮ 14) 3ನೇ ಪ್ರಕರಣದ (2)ನೇ ಉಪ– ಪ್ರಕರಣದ ಖಂಡ (ಎ)ರ ಮೂಲಕ ಸೂಚಿಸಿರುವಂತೆ ಅಧಿಸೂಚನೆ ಸಂಖ್ಯೆ.ಕಾಇ 176 ಎಲ್‌ಎಸ್‌ಐ 2006 ದಿನಾಂಕ:04–02–2010ರ ಮೂಲಕ ಕರ್ನಾಟಕ ರಾಜ್ಯ ಪತ್ರ ದಿನಾಂಕ:04–02–2010ರ ಭಾಗ– IV (ಎ) ಸಂಖ್ಯೆ:ಪಿಆರ್ 69ರಲ್ಲಿ ಪ್ರಕಟಿಸಿ, ಇದರಿಂದ ಭಾದಿತರಾಗಬಹುದಾದ ವ್ಯಕ್ತಿಗಳಿಂದ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಆಕ್ಷೇಪಣೆಗಳು ಹಾಗೂ ಸಲಹೆಗಳನ್ನು ಸರ್ಕಾರಕ್ಕೆ ಸಲ್ಲಿಸುವಂತೆ ತಿಳಿಸಲಾಗಿರುವುದರಿಂದ:

ಕರಡು ಅಧಿಸೂಚನೆಗೆ ಪೂರಕವಾಗಿ ಸ್ವೀಕರಿಸಲ್ಪಟ್ಟ ಆಕ್ಷೇಪಣೆ ಹಾಗೂ ಸಲಹೆಗಳನ್ನು ಸರ್ಕಾರದಿಂದ ನಿಯಮಾನುಸಾರ ಪರಿಗಣಿಸಿರುವುದರಿಂದ:

ಈಗ 1978ರ ಕರ್ನಾಟಕ ರಾಜ್ಯ ನಾಗರೀಕ ಸೇವಾ ಅಧಿನಿಯಮದ (1990ರ ಕರ್ನಾಟಕ ಅಧಿನಿಯಮ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾದ 3ನೇ ಪ್ರಕರಣ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರ ಕೆಳಗಿನ ನಿಯಮಗಳನ್ನು ಈ ಮೂಲಕ ಮಾಡುತ್ತದೆ:–

### ನಿಯಮಗಳು

1) **ಶೀರ್ಷಿಕೆ ಮತ್ತು ಪ್ರಾರಂಭ:–**_(1) ಈ ನಿಯಮಗಳನ್ನು ಕರ್ನಾಟಕ ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವಾ (ನೇಮಕಾತಿ) (ತಿದ್ದುಪಡಿ) ನಿಯಮಗಳು 2010 ಎಂದು ಕರೆಯತಕ್ಕದ್ದು.

2) **ಪರಿಶಿಷ್ಟದ ತಿದ್ದುಪಡಿ:–** ಕರ್ನಾಟಕ ಕಾರ್ಮಿಕರ ರಾಜ್ಯ ವಿಮಾ ಯೋಜನೆ (ವೈದ್ಯಕೀಯ) ಸೇವಾ (ನೇಮಕಾತಿ) ನಿಯಮಗಳು 2007ರ ಪರಿಶಿಷ್ಟದಲ್ಲಿ ಕಾನೂನು ಸಹಾಯಕರ ಹುದ್ದೆ ಕ್ರಮ ಸಂಖ್ಯೆ.20ಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಬದಲಾವಣೆ ಮಾಡಲಾಗಿದೆ.

| ಕ್ರ. ಸಂ. | ಹುದ್ದೆಗಳ ಪ್ರವರ್ಗ | ಹುದ್ದೆಗಳ ಸಂಖ್ಯೆ | | ತಿದ್ದುಪಡಿ | |
|---|---|---|---|---|---|
| | | ಖಾಯಂ | ತಾತ್ಕಾಲಿಕ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
| 20. | ಕಾನೂನು ಸಹಾಯಕ (10,000–18,150) | 03 | – | 1) ಪ್ರಥಮ ದರ್ಜೆ ಸಹಾಯಕರ ಹುದ್ದೆಯಿಂದ ಜೇಷ್ಠತೆ ಮತ್ತು ಅರ್ಹತೆಯ ಆಧಾರದ ಮೇಲೆ ಮುಂಬಡ್ತಿಯ ಮೂಲಕ. 2) ಸೂಕ್ತ ಅಭ್ಯರ್ಥಿಯು ಲಭ್ಯವಿಲ್ಲದಿದ್ದಾಗ ನೇರ ನೇಮಕಾತಿಯ ಮೂಲಕ | **ಮುಂಬಡ್ತಿಗೆ** 1) ಮಾನ್ಯತೆ ಪಡೆದ ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಹೊಂದಿರಬೇಕು. 2) ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ ಕನಿಷ್ಠ 05 ವರ್ಷಗಳ ಸೇವೆ ಸಲ್ಲಿಸಿರಬೇಕು. **ನೇರ ನೇಮಕಾತಿಗೆ** 1) ಮಾನ್ಯತೆ ಪಡೆದ ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಹೊಂದಿರಬೇಕು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋವಿಂದಸ್ವಾಮಿ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು)

## LABOUR SECRETARIAT

## NOTIFICATION

**No.LD 176 LSI 2006, Bangalore, dated:19th July 2010**

Whereas the draft of the Karnataka Employees State Insurance Scheme (Medical) Services (Recruitment) (Amendment) Rules 2010 was published as required by Clause (a) of Sub-section (2) of section 3 of the Karnataka Civil Services Act 1978 (Karnataka Act 14 of 1990) In notification No.LD 176 LSI 2006 dated:4th February 2010 in part IV A of the Karnataka Gazette No.PR 69 dated:4th February 2010 inviting objections and suggestions from all persons likely to be affected thereby within fifteen days from the date of its publication in the official Gazette.

And whereas objection and suggestion received on the said draft has been considered by the State Government.

Now, therefore in exercise of the powers conferred by sub-section (1) of section 3, read with section of the Karnataka State Civil Services Act 1978 (Karnataka Act 14 of 1990) the Government of Karnataka hereby makes the following rules namely:-

**RULES**

**1. Title_and Commencement:-** (1) These rules may be called the Karnataka Employees State Insurance Scheme (Medical) Services (Recruitment) (Amendment) Rules 2010.

**2. Ammendment of Schedule:-** In the schedule to the Karnataka Employees State Insurance Scheme (Medical) Services (Recruitment) Rules2007 to the post of Legal Assistant at Serial No.20, the following shall be substituted namely:-

| Sl. No. | CATEGORY OF POST | No OF POSTS | | AMENDMENT | |
|---|---|---|---|---|---|
| | | PERMANENT | TEMPORARY | METHOD OF RECRUITMENT | MINIMUM QUALIFICATION |
| 20. | Legal Assistant<br><br>(10,000-18,150) | 03 | - | 1.Promotion from the cadre of FDA on seniority cum merit basis.<br>2. If no suitable candidate is available then by Direct Recruitment. | For Promotion<br>1. Must possess Bachelor Degree in law from a recognized University.<br>2. Must have put in a service not less than 05 years in the Cadre of FDA .<br>**For Direct Recruitment**<br>**1.** Must possess Degree in Law from a recognized University. |

By order and in the name of the Governor of Karnataka,

**Govindaswamy**

Desk Officer,

Labour Department. (ESIS (M) Services)

P.R. 699

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ.ಕಾಇ 153 ಎಲ್ಎಸ್ಐ 2010, ಬೆಂಗಳೂರು, ದಿನಾಂಕ: 22ನೇ ಜುಲೈ 2010.**

ಕಾ.ರಾ.ವಿ. ಕಾಯ್ದೆಯ (ಕೇಂದ್ರ ಕಾಯ್ದೆ 1948ರ 34) ಸೆಕ್ಷನ್ 87ರ ಜೊತೆ ಓದಲಾದ ಸೆಕ್ಷನ್ 91–ಎ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಕಂಪೆನಿಗಳಿಗೆ ಕಾರಾವಿ ಕಾಯ್ದೆಯಿಂದ ದಿನಾಂಕ:01–01–2010 ರಿಂದ 31–05–2010ರ ಅವಧಿಗೆ ವಿನಾಯ್ತಿ ನೀಡಿದೆ.

1) ಮೆ:ದೇಸಾಯಿ ಬ್ರದರ್ಸ್. ಮಂಗಳೂರು.
2) ಮೆ:ಜ್ಯೋತಿ ಹೋಮ್ ಇಂಡಸ್ಟ್ರೀಸ್, ಮೈಸೂರು.
3) ಮೆ:ಗುರುಕೃಪಾ ಬೀಡಿ ಇಂಡಸ್ಟ್ರೀಸ್. ಮೈಸೂರು.

